# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 417 |
| ಸದಸ್ಯರ ಹೆಸರು | : | ಶ್ರೀ ಅಲ್ಲಂ ವೀರಭದ್ರಪ್ಪ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 04.02.2021 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ತುಂಗಭದ್ರಾ ಜಲಾಶಯಕ್ಕೆ ಮಳೆಗಾಲದಲ್ಲಿ ಹೆಚ್ಚುವರಿ ನೀರು ಹರಿದು ಬರುವುದರಿಂದ ಹೆಚ್ಚುವರಿ ನೀರನ್ನು ಸಂಗ್ರಹಿಸಲು ಗಂಗಾವತಿ ಹತ್ತಿರ ಇರುವ ನವಲಿ ಗ್ರಾಮದ ಹತ್ತಿರ ಸಮಾನಾಂತರ ಜಲಾಶಯ ನಿರ್ಮಿಸಲು ಕ್ರಮಕೈಗೊಳ್ಳಲಾಗಿದೆಯೇ; ಇದಕ್ಕಾಗಿ ಮುಂದಿನ ಆಯವ್ಯಯದಲ್ಲಿ ಎಷ್ಟು ಹಣ ಬಿಡುಗಡೆ ಮಾಡಲು ಯೋಜಿಸಲಾಗಿದೆ? (ಪೂರ್ಣ ಮಾಹಿತಿ ತಿಳಿಸುವುದು) | ತುಂಗಭದ್ರಾ ಜಲಾಶಯದಲ್ಲಿ ತುಂಬಿರುವ ಹೂಳಿನಿಂದಾಗಿ ನಷ್ಟವಾಗಿರುವ ನೀರಿನ ಕೊರತೆಯನ್ನು ನೀಗಿಸುವ ಪರ್ಯಾಯ ಯೋಜನೆಗಾಗಿ "Pre-Feasibility Report on SILTATION IN TUNGABHADRA RESERVOIR-Capacity Restoration-by constructing balancing reservoir near Navali through augmentation cum flood flow canal" ಪ್ರಸ್ತಾವನೆಯನ್ನು ತಯಾರಿಸಲಾಗಿದ್ದು ಸದರಿ ಯೋಜನೆಯಲ್ಲಿ ಕೊಪ್ಪಳ ತಾಲ್ಲೂಕಿನ ಹಿರೇಬಗನಾಳ ಗ್ರಾಮದಿಂದ ಸುಮಾರು 38 ಕಿ.ಮೀ ಕಾಲುವೆ ಮುಖಾಂತರ (3 ಕಿ.ಮೀ. ಟನಲ್‌ಗಳ ಒಳಗೊಂಡಂತೆ) ಕಾಲುವೆ ನಿರ್ಮಿಸಿ, ಇದರ ಮೂಲಕ ಕೊಪ್ಪಳ ಜಿಲ್ಲೆಯ ನವಲಿ ಗ್ರಾಮದ ಹತ್ತಿರ ಸಮನಾಂತರ ಜಲಾಶಯ ನಿರ್ಮಿಸಿ, ಸಮತೋಲನಾ ಜಲಾಶಯಕ್ಕೆ ನೀರನ್ನು ಹರಿಸಿ ಜಲಾಶಯದಿಂದ ಫೀಡರ್ ಕಾಲುವೆ ಮುಖಾಂತರ ತುಂಗಭದ್ರಾ ಎಡದಂಡೆ ಕಾಲುವೆಯ 45ನೇ ಮೈಲಿನಲ್ಲಿ ಜೋಡಿಸಿ ಕಾಲುವೆಗೆ ನೀರು ಹರಿಸಲು ಪ್ರಸ್ತಾಪಿಸಲಾಗಿರುತ್ತದೆ.<br><br>ಸದರಿ ಪ್ರಸ್ತಾವನೆಯು, ತುಂಗಭದ್ರಾ ಮಂಡಳಿಯ ಮುಂದೆ ಪರಿಶೀಲನೆಯಲ್ಲಿರುತ್ತದೆ.<br><br>ಸದರಿ ಯೋಜನೆಯ ವಿವರವಾದ ಯೋಜನಾ ವರದಿಯನ್ನು ತಯಾರಿಸುವ ಕನ್ಸಲ್ಟೆನ್ಸಿ ಅಂದಾಜು ಪಟ್ಟಿ ರೂ.1430.00 ಲಕ್ಷಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಜಸಂಇ 12 ಎಂಟಿಬಿ 2017 ಬೆಂಗಳೂರು ದಿನಾಂಕ 16/05/2020 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ಸದರಿ ಕನ್ಸಲ್ಟೆನ್ಸಿ ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಅಂತಿಮಗೊಂಡಿದ್ದು, ಸರ್ವೆ ಕಾರ್ಯ ಪ್ರಗತಿಯಲ್ಲಿರುತ್ತದೆ. |

**ಸಂಖ್ಯೆ: ಜಸಂಇ 18 ಎಂಎಲ್‌ಎ 2021**

**(ರಮೇಶ್ ಲ. ಜಾರಕಿಹೊಳಿ)**
ಜಲಸಂಪನ್ಮೂಲ ಸಚಿವರು